## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 560
2. ವಿಧಾನ ಪರಿಷತ್ತ ಸದಸ್ಯರು : ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)
3. ಉತ್ತರಿಸ ಬೇಕಾದ ದಿನಾಂಕ : 16-09-2021
4. ಉತ್ತರಿಸಬೇಕಾದ ಸಚಿವರು : ಮುಖ್ಯಮಂತ್ರಿ

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಕೋವಿಡ್-19 ಸಮಸ್ಯೆಯ ಹಿನ್ನಲೆಯಲ್ಲಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿನ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಹಾಗೂ ಶಾಲಾ-ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸುವುದನ್ನು ಆರ್ಥಿಕ ಇಲಾಖೆಯ ಸುತ್ತೋಲೆ ಸಂ: ಆಇ/157/ವೆ-08/2020ರ ಆದೇಶದಂತೆ ತಡೆಹಿಡಿಯಲಾಗಿದೆಯೇ; | ಹೌದು |
| (ಆ) | ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಹಿಂಪಡೆದಿದೆಯೇ; ಅಥವಾ ಸಡಿಲಗೊಳಿಸಿದೆಯೇ; ಸಡಿಲಗೊಳಿಸಿದ್ದಲ್ಲಿ, ಸಡಿಲಿಕೆಯ ಅಂಶಗಳನ್ನು ವಿವರಣೆಯೊಂದಿಗೆ ಒದಗಿಸುವುದು; | ಕೋವಿಡ್-19ರಿಂದಾಗಿ ರಾಜ್ಯದಲ್ಲಿ ತೀವ್ರ ಆರ್ಥಿಕ ಸಂಕಷ್ಟ ಸೃಷ್ಟಿಯಾಗಿರುವ ಹಿನ್ನೆಲೆಯಲ್ಲಿ ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸಿ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ, ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ನಿವೃತ್ತಿ, ನಿಧನ, ರಾಜೀನಾಮೆ, ಇನ್ನಿತರ ಕಾರಣಗಳಿಂದ ಖಾಲಿಯಾಗಿರುವ ಹುದ್ದೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡುವುದನ್ನು ತಡೆಹಿಡಿಯಲು ಸುತ್ತೋಲೆ ಸಂಖ್ಯೆ:ಆಇ 157 ವೆಚ್ಚ-8/2020, ದಿನಾಂಕ:10.06.2020ರಲ್ಲಿ ಸೂಚನೆಗಳನ್ನು ನೀಡಲಾಗಿತ್ತು.<br><br>ಆದಾಗ್ಯೂ, ಶೈಕ್ಷಣಿಕ ಹಿತದೃಷ್ಟಿ ಮತ್ತು ಅಭ್ಯರ್ಥಿಗಳ ವಯೋಮಿತಿ ಮೀರುವುದನ್ನು ಗಮನದಲ್ಲಿರಿಸಿ, ಖಾಸಗಿ ಅನುದಾನಿತ ಪ್ರೌಢಶಾಲೆ, ಪದವಿ ಪೂರ್ವ ಮತ್ತು ಪದವಿ ಕಾಲೇಜುಗಳಲ್ಲಿ |

| | | |
|---|---|---|
| | | ದಿನಾಂಕ:31.12.2015ರ ಅಂತ್ಯಕ್ಕೆ ನಿವೃತ್ತಿ, ಮರಣ, ರಾಜೀನಾಮೆ ಇತರೆ ಕಾರಣಗಳಿಂದ ಖಾಲಿ ಉಂಟಾಗಿರುವ ಹುದ್ದೆಗಳ ಪೈಕಿ ಈಗಾಗಲೇ ಸರ್ಕಾರದಿಂದ ಅನುಮೋದನೆಗೊಂಡು ನೇಮಕಾತಿ ಪ್ರಕ್ರಿಯೆಯು ಇಲಾಖೆಯಲ್ಲಿ ಅಂತಿಮ ಹಂತದಲ್ಲಿ ಬಾಕಿ ಇರುವ ಕ್ರಮವಾಗಿ ಪ್ರೌಢ ಶಾಲೆಗಳಿಗೆ 257, ಪದವಿ ಪೂರ್ವ ಕಾಲೇಜುಗಳಿಗೆ 173, ಪದವಿ ಕಾಲೇಜುಗಳಿಗೆ 371 ಬೋಧಕ ಹುದ್ದೆಗಳಿಗೆ ನೇಮಕಾತಿ ಆದೇಶವನ್ನು 2021-22ನೇ ಶೈಕ್ಷಣಿಕ ವರ್ಷ ಪ್ರಾರಂಭಗೊಂಡ ನಂತರ ನೀಡಲು ಅನುಮತಿಸಲಾಗಿರುತ್ತದೆ. |
| (ಇ) | ಆರ್ಥಿಕ ವಿತವ್ಯಯದ ಆದೇಶವನ್ನು ಹಿಂಪಡೆಯದೇ ಇದ್ದಲ್ಲಿ, ಯಾವ ಕಾಲ ಮಿತಿಯೊಳಗೆ ಹಿಂಪಡೆಯಲಾಗುವುದು?(ಸಂಪೂರ್ಣ ವಿವರವನ್ನು ಒದಗಿಸುವುದು) | ರಾಜ್ಯದ ಆರ್ಥಿಕ ಸ್ಥಿತಿಯು ಸುಸ್ಥಿತಿಗೆ ಬಂದ ನಂತರ ಸುತ್ತೋಲೆ ಸಂಖ್ಯೆ:ಆಇ 157 ವೆಚ್ಚ-8/2020, ದಿನಾಂಕ:10.06.2020ನ್ನು ಹಿಂಪಡೆಯುವ ಬಗ್ಗೆ ಪರಿಶೀಲಿಸಲಾಗುವುದು. |

**ಸಂಖ್ಯೆ:ಆಇ125 ವೆಚ್ಚ-8/2021**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

**ದಿನಾಂಕ:16-09-2021ರಂದು ಉತ್ತರಿಸಬೇಕಿರುವ ಶ್ರೀ ಅರುಣ್ ಶಹಾಪುರ (ಶಿಕ್ಷಕರ ಕ್ಷೇತ್ರ), ಮಾನ್ಯ ಕರ್ನಾಟಕ ವಿಧಾನ ಪರಿಷತ್ ಸದಸ್ಯರು, ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:560ಕ್ಕೆ ಪೂರಕಟಿಪ್ಪಣಿ**

ಸರ್ಕಾರದ ನೀತಿಯಂತೆ ಹಾಗು ವೇತನ ಸಹಾಯಾನುದಾನ ಸಂಹಿತೆಯನ್ವಯ ರಾಜ್ಯ ಸರ್ಕಾರವು ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ವೇತನ ಸಹಾಯಾನುದಾನ ಮಾತ್ರ ನೀಡುತ್ತದೆ. ಉಳಿದಂತೆ, ವಿದ್ಯಾರ್ಥಿಗಳ ದಾಖಲಾತಿ/ಹಾಜರಾತಿಗೆ ಅನುಗುಣವಾಗಿ ಶಿಕ್ಷಕರ ನೇಮಕಾತಿ, ಶಾಲಾ ನಿರ್ವಹಣೆ ಇತ್ಯಾದಿಯನ್ನು ಸಂಬಂಧಿಸಿದ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳು ನಿರ್ವಹಿಸುತ್ತವೆ.

2) ಅದರಂತೆ, ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ದಿನಾಂಕ:31.12.2015ರವರೆಗೆ ವಯೋನಿವೃತ್ತಿ, ರಾಜಿನಾಮೆ, ನಿಧನ ಇತ್ಯಾದಿ ಕಾರಣಗಳಿಂದ ತೆರವಾಗಿರುವ ಬೋಧಕ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಿಕೊಳ್ಳಲು ದಿನಾಂಕ:19.06.2017 ಹಾಗು ದಿನಾಂಕ:21.08.2018ರಂದು ಹಾಗೂ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ದಿನಾಂಕ:28.07.2017ರಂದು ಆರ್ಥಿಕ ಇಲಾಖೆಯ ಸಹಮತಿಯನ್ನು ನೀಡಲಾಗಿರುತ್ತದೆ. ಅದರಂತೆ, ಸಂಬಂಧಪಟ್ಟ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳು ನಿಯಮಾನುಸಾರ ಹುದ್ದೆಗಳನ್ನು ಭರ್ತಿ ಮಾಡಿಕೊಂಡು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಬೇಕಿತ್ತು. ಆದರೆ, ಈ ನಿಟ್ಟಿನಲ್ಲಿ ಆಡಳಿತ ಮಂಡಳಿಗಳು ಸಕಾಲದಲ್ಲಿ ಅಗತ್ಯ ಕ್ರಮಹಿಸಿರುವುದಿಲ್ಲ.

3) ಖಾಸಗಿ ಅನುದಾನಿತ ಪ್ರೌಢಶಾಲೆಗಳು, ಪದವಿ ಪೂರ್ವ ಕಾಲೇಜುಗಳು ಹಾಗು ಪದವಿ ಕಾಲೇಜುಗಳಲ್ಲಿ ದಿನಾಂಕ:31.12.2015ರವರೆಗೆ ಖಾಲಿಯಾಗಿರುವ ಹುದ್ದೆಗಳು, ದಿನಾಂಕ:10.06.2020 ರವರೆಗೆ ಭರ್ತಿ ಮಾಡಿರುವ ಹುದ್ದೆಗಳು ಹಾಗೂ '2021-22ನೇ ಸಾಲಿನಲ್ಲಿ ನೇಮಕಾತಿ ಆದೇಶ ನೀಡಲು ಸಹಮತಿಸಿರುವ ಹುದ್ದೆಗಳ ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ.

4) 2020ನೇ ಸಾಲಿನ ಆರಂಭದಲ್ಲಿ ಉದ್ಭವಿಸಿದ ಕೋವಿಡ್-19 ಸಾಂಕ್ರಾಮಿಕ ರೋಗವನ್ನು ತಡೆಗಟ್ಟುವ ನಿಟ್ಟಿನಲ್ಲಿ ರಾಜ್ಯಾದ್ಯಂತ ಲಾಕ್‌ಡೌನ್ ಜಾರಿ ಮಾಡಿದ್ದರಿಂದಾಗಿ ರಾಜ್ಯದ ರಾಜಸ್ವ ಸಂಗ್ರಹಣೆಯಲ್ಲಿ ತೀವ್ರ ಕುಸಿತ ಉಂಟಾಗಿ ಆರ್ಥಿಕ ಸಂಕಷ್ಟ ಎದುರಾದ ಹಿನ್ನೆಲೆಯಲ್ಲಿ ಸರ್ಕಾರದ ಬದ್ಧ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸುವ ನಿಟ್ಟಿನಲ್ಲಿ ಹಲವು ಉಪಕ್ರಮಗಳನ್ನು ಕೈಗೊಳ್ಳುವ

ಅನಿವಾರ್ಯತೆ ಉಂಟಾಯಿತು. ಇದರ ಒಂದು ಭಾಗವಾಗಿ, ನೇರನೇಮಕಾತಿಯನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ನಿವೃತ್ತಿ, ನಿಧನ, ರಾಜೀನಾಮೆ, ಇತ್ಯಾದಿ ಕಾರಣಗಳಿಂದ ಖಾಲಿಯಾಗಿರುವ ಹುದ್ದೆಗಳನ್ನು 2020–21ನೇ ಸಾಲಿನಲ್ಲಿ ಭರ್ತಿ ಮಾಡುವುದನ್ನು ತಡೆಹಿಡಿಯಲು ಸುತ್ತೋಲೆ ಸಂಖ್ಯೆ:ಆಇ 157 ವೆಚ್ಚ–8/2020, ದಿನಾಂಕ:10.06.2020ರಲ್ಲಿ ಸೂಚನೆಗಳನ್ನು ನೀಡಲಾಗಿರುತ್ತದೆ. ತದನಂತರ, ಬ್ಯಾಕ್‌ಲಾಗ್ ಹಾಗು ಕಲ್ಯಾಣ ಕರ್ನಾಟಕ ವೃಂದದ ಹುದ್ದೆಗಳನ್ನೊಳಗೊಂಡಂತೆ ರಾಜ್ಯ ಸಿವಿಲ್ ಸೇವೆಯಲ್ಲಿನ ಎಲ್ಲಾ ನೇರನೇಮಕಾತಿ ಹುದ್ದೆಗಳನ್ನು 2020–21ನೇ ಸಾಲಿನ ಆರ್ಥಿಕ ವರ್ಷದಲ್ಲಿ ಭರ್ತಿ ಮಾಡುವುದನ್ನು ದಿನಾಂಕ:06.07.2020ರ ಸುತ್ತೋಲೆ ಸಂಖ್ಯೆ:ಆಇ 03 ಬಿಇಎಂ 2020ರಲ್ಲಿ ತಡೆಹಿಡಿಯಲು ಸೂಚನೆಗಳನ್ನು ನೀಡಲಾಗಿರುತ್ತದೆ.

5) ಆದಾಗ್ಯೂ, ಶೈಕ್ಷಣಿಕ ಹಿತದೃಷ್ಟಿ ಮತ್ತು ಅಭ್ಯರ್ಥಿಗಳ ವಯೋಮಿತಿ ಮೀರುವುದನ್ನು ಗಮನದಲ್ಲಿರಿಸಿ, ಖಾಸಗಿ ಅನುದಾನಿತ ಪ್ರೌಢಶಾಲೆ, ಪದವಿ ಪೂರ್ವ ಕಾಲೇಜು ಮತ್ತು ಪದವಿ ಕಾಲೇಜುಗಳಲ್ಲಿ ದಿನಾಂಕ:31.12.2015ರ ಅಂತ್ಯಕ್ಕೆ ನಿವೃತ್ತಿ, ಮರಣ, ರಾಜೀನಾಮೆ ಇತರೆ ಕಾರಣಗಳಿಂದ ಖಾಲಿಯಾಗಿರುವ ಬೋಧಕ ಹುದ್ದೆಗಳ ಪೈಕಿ ಈಗಾಗಲೇ ಸರ್ಕಾರದಿಂದ ಅನುಮೋದನೆಗೊಂಡು ನೇಮಕಾತಿ ಪ್ರಕ್ರಿಯೆಯು ಇಲಾಖೆಯಲ್ಲಿ ಅಂತಿಮ ಹಂತದಲ್ಲಿ ಬಾಕಿ ಇರುವ ಕ್ರಮವಾಗಿ ಪ್ರೌಢ ಶಾಲೆಗಳಿಗೆ 257, ಪದವಿ ಪೂರ್ವ ಕಾಲೇಜುಗಳಿಗೆ 173, ಪದವಿ ಕಾಲೇಜುಗಳಿಗೆ 371 ಬೋಧಕ ಹುದ್ದೆಗಳಿಗೆ ನೇಮಕಾತಿ ಆದೇಶವನ್ನು 2021–22ನೇ ಶೈಕ್ಷಣಿಕ ವರ್ಷ ಪ್ರಾರಂಭಗೊಂಡ ನಂತರ ನೀಡಲು ಅನುಮತಿಸಲಾಗಿರುತ್ತದೆ.

6) ಕೋವಿಡ್–19 ಸಾಂಕ್ರಾಮಿಕ ರೋಗದಿಂದಾಗಿ ರಾಜಸ್ವ ಸಂಗ್ರಹಣೆಯಲ್ಲಿ ತೀವ್ರ ಕುಸಿತ ಉಂಟಾಗಿರುವುದರಿಂದ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಅಗತ್ಯವಾಗಿರುತ್ತದೆ. ಇದಕ್ಕಾಗಿ ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸುವ ಉದ್ದೇಶಕ್ಕೆ ಕೈಗೊಂಡಿರುವ ಉಪಕ್ರಮಗಳಲ್ಲಿ ನೇಮಕಾತಿಗಳನ್ನು ತಡೆಹಿಡಿದಿರುವುದು ಸೇರಿದೆ. ಈ ಹಿನ್ನೆಲೆಯಲ್ಲಿ ಆರ್ಥಿಕ ಮಿತವ್ಯಯದ ಆದೇಶವನ್ನು ತಕ್ಷಣ ಹಿಂಪಡೆಯುವುದು ಕಷ್ಟಸಾಧ್ಯವಾಗಿರುತ್ತದೆ.

## ಅನುಬಂಧ

| ವಿಭಾಗ | ದಿನಾಂಕ:31.12.2015ರವರೆಗೆ ಖಾಲಿಯಾಗಿರುವ ಹುದ್ದೆಗಳು | ದಿನಾಂಕ:10.06.2020ರವರೆಗೆ ಭರ್ತಿ ಮಾಡಿರುವ ಹುದ್ದೆಗಳು | 2021-22ನೇ ಸಾಲಿನಲ್ಲಿ ನೇಮಕಾತಿ ಆದೇಶ ನೀಡಲು ಅನುಮತಿಸಿರುವ ಹುದ್ದೆಗಳು |
|---|---|---|---|
| ಪ್ರೌಢಶಾಲೆಗಳು | 3633 | 1452 | 257 |
| ಪದವಿ ಪೂರ್ವ ಕಾಲೇಜುಗಳು | 1326 (ಆರ್ಥಿಕ ಇಲಾಖೆಯು 480 ಹುದ್ದೆಗಳ ಭರ್ತಿಗೆ ಸಹಮತಿಸಿರುತ್ತದೆ | – | 173 |
| ಪದವಿ ಕಾಲೇಜುಗಳು | 2137 | 367 | 371 |
| **ಒಟ್ಟು** | **7096** | **1819** | **801** |

Umak

(ಉಮಾ. ಕೆ.)

ಸರ್ಕಾರದ ಉಪ ಕಾಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು-2).